ಡಾ॥ ಜ್ಯೋತ್ಸ್ನಾ ಕಾಮತ

# ವಾಸ್ತು, ಶಿಲ್ಪ, ಭಿತ್ತಿಚಿತ್ರಗಳಲ್ಲಿ ತೇರು

ಪ್ರತಿ ಊರಿನ ಆರಾಧ್ಯದೇವತೆ, ಉತ್ಸವ ಮೂರ್ತಿಯ ರೂಪದಲ್ಲಿ ಊರಲ್ಲಿ ಸಂಚರಿಸುವುದುಂಟು. ಅದರಂತೆ ಮುದುಕರಿಗೆ, ಚಿಕ್ಕ ಮಕ್ಕಳಿಗೆ ಅನಾರೋಗ್ಯವಂತರಿಗೆ, ಅಶಕ್ತರಿಗೆ, ವೇಳೆಯ ಅಭಾವ ವಿರುವವರಿಗೆ. ಪ್ರವೇಶ ನಿಷಿದ್ಧವಿದ್ದ ದುರ್ದೈವಿಗಳಿಗೆ, ದೇವದರ್ಶನಕ್ಕೆ ದೇವಾಲಯಕ್ಕೆ ಹೋಗಲಾಗದ್ದರಿಂದ, ವರ್ಷಕ್ಕೊಮ್ಮೆಯಾದರೂ ಅವರ ಮನೆಯ ಬಾಗಿಲಿನಲ್ಲಿಯೇ ದೇವರು ದರ್ಶನ ಕೊಡುವುದರ ಸಲುವಾಗಿ ರಥೋತ್ಸವದ ಏರ್ಪಾಡಾಗಿದೆ. ಅಂತೆಯೇ ತೇರು ಎಂದರೆ ನಾಲ್ಕು ಗಾಲಿ ಜೋಡಿಸಿದ ಚಿಕ್ಕ ದೇವಾಲಯದಂತಿರುತ್ತದೆ. ದೇವಾಲಯದ ವಿವಿಧ ಭಾಗಗಳನ್ನು ತೇರಿನಲ್ಲಿಯೂ ಗುರುತಿಸಬಹುದು. ಚಿತ್ತಾರಗಳು, ಚಿತ್ರಪತ್ರಿಕೆಗಳು, ರಾಮಾಯಣ, ಮಹಾಭಾರತದ ಸನ್ನಿವೇಶಗಳು, ಸಾಮಾಜಿಕ ಜೀವನ, ಶೃಂಗಾರಚಿತ್ರಗಳು ತೇರಿನ ಹೊರಮೈಯಲ್ಲಿ ರೂಪಗೊಂಡಿರುತ್ತದೆ. ಈ ಭಾಗವನ್ನು ಬಹುಕಾಲ ಬಾಳುವಂತೆ ಕೊರಡಿನಲ್ಲಿ ರಚಿಸುವುದು ವಾಡಿಕೆ. ಐಶ್ವರ್ಯವಂತ ದೈವತಗಳ ತೇರುಗಳಲ್ಲಿ ಬೆಳ್ಳಿ, ಬಂಗಾರಗಳ ತಗಡುಗಳನ್ನು ಹೊದಿಸುವವರೂ ಇಲ್ಲದಿಲ್ಲ. ಉತ್ಸವ ಮೂರ್ತಿಯನ್ನು ಸ್ಥಾಪಿಸಲಾಗುವ ಗರ್ಭಗುಡಿಯನ್ನು ಚಿತ್ರಫಲಕಗಳ ಜೋಡಣೆಯಿಂದ ನಿರ್ಮಿಸಲಾಗುತ್ತದೆ. ಗೋಲಾಕಾರದ ಗೋಪುರವನ್ನು ವಿವಿಧ ವರ್ಣದ ಪತಾಕೆಗಳಿಂದ ಅಲಂಕರಿಸಲಾಗುತ್ತದೆ. ಹಿತ್ತಾಳೆ ಇಲ್ಲವೇ ಕಂಚಿನ ಕಳಶವನ್ನು ಜೋಡಿಸಲಾಗಿರುತ್ತದೆ.

ಚಲಿಸುವದಕ್ಕಾಗಿಯೇ ನಿರ್ಮಿಸಿದ ತೇರು, ಕರ್ನಾಟಕದ ವಾಸ್ತುಶಿಲ್ಪ, ಭಿತ್ತಿಚಿತ್ರಗಳಲ್ಲಿ ಸ್ಥಾಯಿಯಾಗಿರುವಂತೆಮಾಡಿದ್ದು ನಮ್ಮ ಕಲಾಕಾರರ ವೈಶಿಷ್ಟ್ಯ. ಹಂಪೆಯ ವಿಜಯ ವಿಠ್ಠಲ ದೇವಾಲಯದ ಆವಾರದಲ್ಲಿ ಎರಡನೇ ದೇವರಾಯನ ಕಾಲದಲ್ಲಿ (ಕ್ರಿ.ಶ. 1422-46) ನಿರ್ಮಾಣವಾದ ಶಿಲಾರಥವಿದೆ. ಹಿಂದೊಮ್ಮೆ ದಕ್ಷಿಣಶೈಲಿಯ ಗೋಪುರ ಇದಕ್ಕೆ ಇತ್ತು, ಎನ್ನವುದು ಹಳೆಯ ಛಾಯಾಚಿತ್ರಗಳಿಂದ ಅರಿಯಬಹುದಾಗಿದೆ. ಅದು ಇಟ್ಟಂಗಿಯಿಂದ ರಚಿತ ವಾದದ್ದರಿಂದ ಬಿದ್ದು ಹೋಗಿ ಶಿಲೆಯ ಭಾಗ ಮಾತ್ರ ಉಳಿದುಕೊಂಡಿದೆ. ಪ್ರವೇಶದ್ವಾರದ ಅಕ್ಕಪಕ್ಕದಲ್ಲಿ ಜೋಡಿ ಆನೆಗಳಿದ್ದು ಎಡಬಲದಲ್ಲಿ ತಿರುಗಿಸಬಹುದಾದಂತಹ ಎರಡು ಜೋಡಿ ಗಾಲಿಗಳಿವೆ. ಇವುಗಳ ಮೇಲೆ ಹೂ ಬಳ್ಳಿಗಳನ್ನು ಅಂದವಾಗಿ ಕೊರೆಯಲಾಗಿದೆ. ಸಾಧ್ಯ ವಿದ್ದಲ್ಲೆಲ್ಲ ಚಿತ್ರಪಟ್ಟಿಕೆಗಳನ್ನು ಜೋಡಿಸಿ ಅಲಂಕರಿಸಿದ್ದಾರೆ. ಗರ್ಭಗುಡಿಯಲ್ಲಿ ಗರುಡನ ವಿಗ್ರಹವಿದೆ. ವಿಶೇಷ ಸಮಾರಂಭದಲ್ಲಿ ವಿಠ್ಠಲನ ವಿಗ್ರಹದ ರಥೋತ್ಸವ ಏರ್ಪಡುತ್ತಿತ್ತೊ ಏನೋ! ಶಿಲಾರಥದ ಭಾರವಾದ ಗಾಲಿಗಳನ್ನು ತಿರುಗಿಸಿದರೆ ಅವರ ಆಕಾಂಕ್ಷೆಗಳು ಈಡೇರುತ್ತವೆ, ಎಂದು ಇಂದಿಗೂ ನಂಬಲಾಗುತ್ತದೆ.

ಉತ್ತರ ಕನ್ನಡ ಜಿಲ್ಲೆಯ ಛಟಕಳದಲ್ಲಿರುವ ವಿಜಯನಗರ ಕಾಲದ ಕೇತಪ್ಪಯ್ಯ ದೇವಾಲಯ (ಕ್ರಿ.ಶ.ಸು1546) ದ ಹೊರಜಗತಿಯ ಮೇಲೆ ತೇರನ್ನು ಎಳೆಯುವ ಉಬ್ಬು ಚಿತ್ರವಿದೆ. ಎತ್ತರವಿಲ್ಲದ ತೇರನ್ನು ಹಗ್ಗದ ನೆರವಿನಿಂದ ಭಕ್ತಾದಿಗಳು ಎಳೆಯುತ್ತಿದ್ದಾರೆ. ಇವರೆಲ್ಲ ನಡುವಿಗೆ ಅಷ್ಟ ಪಂಚೆ ಸುತ್ತಿಕೊಂಡು ತಲೆಗೆ ರುಮಾಲು ಧರಿಸಿದ್ದಾರೆ. ಇಂದಿಗೂ ಆ ಪ್ರದೇಶದಲ್ಲಿ ಬೀಡು ಬಿಟ್ಟ ಗೊಂಡರು, ಗ್ರಾಮ ಒಕ್ಕಲಿಗರು, ಸೇರುಗಾರರು ಇದೇ ರೀತಿಯ ಬಟ್ಟೆಗಳನ್ನು ಧರಿಸುವ ಪರಿಪಾಠ ಇಟ್ಟುಕೊಂಡಿದ್ದಾರೆ. ತೇರಿನ ಹಿಂದುಗಡೆ ತಲೆಗೆ ಕುಲಾಯಿ ಧರಿಸಿದ ಮುಕಾದಂನು ತೇರಿನ ದಿಕ್ಕುಮತ್ತು ವೇಳೆಯನ್ನು ನಿಯಂತ್ರಿಸಲು ಪೆಟಮಣೆ ಹಿಡಿದು ಸಾಗುತ್ತಿದ್ದಾನೆ. ಇಂದಿಗೂ ತೇರಿಗೆ ತಡೆಹಾಕುವ ಇಂಥ ಸಾಧನ ಬಳಕೆಯಲ್ಲಿದೆ, ಎಂದು ಇಲ್ಲಿ ಸ್ಮರಿಸಿಕೊಳ್ಳಬಹುದು. ಅದೇ ಜಿಲ್ಲೆಯ ವೆಂಕಟಾಪುರದ ವೆಂಕಟರಮಣ ದೇವಾಲಯ (ಕ್ರಿ.ಶ.1661) ದ ಗರ್ಭಗುಡಿಯ ಹೊರಗಡೆಯಲ್ಲಿ ಸಾಲಂಕೃತ ತೇರಿನ ಉಬ್ಬು ಚಿತ್ರವಿದೆ. ಇದನ್ನು ನೋಡುತ್ತಿದ್ದಂತೆ ಕರ್ನಾಟಕದ ಕರಾವಳಿಯಲ್ಲಿ ಇಂದಿಗೂ ಪ್ರಚಲಿತವಿದ್ದ ತೇರುಗಳು ಕಣ್ಣಿಗೆ ಕಟ್ಟಿದಂತಾಗುತ್ತದೆ. ವೆಂಕಟಾಪುರದಲ್ಲಿ ವಿಷ್ಣುವಿನ ವಿಗ್ರಹವನ್ನು ಉತ್ಸವ ಮೂರ್ತಿಯಾಗಿ ಬಳಸಲಾಗಿದೆ.

ಶ್ರವಣಬೆಳ್ಗೊಳದ ಜೈನಮಠ (ಕ್ರಿ.ಶ 1825) ದ ಒಳಾಂಗಣವನ್ನು ಸುತ್ತುವರಿದ ಗೋಡೆಗಳಲ್ಲಿ ರಥೋ

ತ್ಸವ ಆಚರಣೆಯ ಭಿತ್ತಿಚಿತ್ರಗಳು ಅಚ್ಚಳಿಯದೇ ಉಳಿದು ಕೊಂಡಿವೆ. ಅಂತಹದೇ ತೇರು ಇಂದಿಗೂ ಅಲ್ಲಿ ಬಳಕೆಯಲ್ಲಿದೆ. ಅದೇ ತೇರು ಈಗಲೂ ಇದ್ದರೂ ಆಶ್ಚರ್ಯವಿಲ್ಲ! ಸಿಂಹಗಳಿಂದ ಅಲಂಕೃತ ಗರ್ಭಗುಡಿಯಲ್ಲಿ ಚತುರ್ಭುಜೆ ಪದ್ಮಾವತಿಯ ವಿಗ್ರಹ ಸ್ಥಾಪಿಸಿ, ರುದ್ರಾಕ್ಷಿಮಾಲೆಗಳನ್ನು ಧರಿಸಿದ ಈರ್ವರು ಪುಜಾರಿಗಳು ಪೂಜಾನಿರತರಾಗಿದ್ದಾರೆ. ಗೋಪುರವನ್ನು ಮಹಡಿಗಳಂತೆ ರಚಿಸಿ ಅವುಗಳಿಂದ ಭಗವಾ ಝೆಂಡಾಗಳನ್ನು ಹಾರಿಸಲಾಗಿದೆ. ಹಿಂಬದಿಗೆ ಭಕ್ತಾದಿಗಳು ಗಾಲಿಗಳ ಅಡಿಸಿಕ್ಕು ನುಚ್ಚು ನೂರಾಗದಂತೆ ರಕ್ಷಿಸಲು ಮೂವರು ಪೈಲವಾನರು ಸೆಟ್ಟು ಹೊಡಿದು ನಿಂತಿದ್ದಾರೆ. ಅವರ ಎಡ ಮತ್ತು ಬಲಬದಿಗೆ ಆನೆ ಮತ್ತು ಒಂಟೆಗಳ ಮೇಲೆ ನಗಾರಿಗಳನ್ನು ಏಕಪ್ರಕಾರವಾಗಿ ಬಡಿಯಯಲಾಗುತ್ತಿದೆ. ತೇರಿನ ಎದುರು ಜೈನ ಮಠದ ಹಿರಿಯ ಗುರುಗಳು ಕಾಲುನಡಿಗೆಯಲ್ಲಿ ಹೊರಟಾಗ ಕಿರಿಯಗುರುಗಳು ಅವರನ್ನು ಬರಮಾಡಿಕೊಳ್ಳುತ್ತಿದ್ದಾರೆ. ಅವರ ಉಡುಪು ವಿಶಿಷ್ಟರೀತಿಯಾಗಿದೆ. ತಲೆಗೆ ಟೋಪಿ ಧರಿಸಿ, ಧೋತರವನ್ನು ಹೆಚ್ಚು ನೆರಿಗೆಗಳು ಬರುವಂತೆ ಉಟ್ಟು ಕೈಯಲ್ಲಿ ನವಿಲು ಗರಿಯ ಪಿಂಛ ಹಿಡಿದಿದ್ದಾರೆ, ಹಿರಿಯ ಗುರುಗಳು ಪಾದುಕೆಗಳನ್ನು ಧರಿಸಿದ್ದರೆ, ಕಿರಿಯರು ಬರಿಗಾಲಲ್ಲಿ ಇದ್ದಾರೆ. ಅವರ ವರ್ಚಸ್ಸು, ಸ್ಥಾನಮಾನಗಳನ್ನು ಸೂಚಿಸುವ ಸಲುವಾಗಿ ಛತ್ರ, ಚಾಮರಗಳನ್ನು ಹಿಡಿದವರು ಮೊದಲಾದವರನ್ನು ಸೇರಿಸಲಾಗಿದೆ. ಈ ಸೇವಕರೆಲ್ಲ ನಿಲುವಂಗಿ ತೊಟ್ಟು, ಸೊಂಟಕ್ಕೆ ಪಟ್ಟಿ ಬಿಗಿದುಕೊಂಡು ತಲೆಗೆ ರುಮಾಲು ಸುತ್ತಿಕೊಂಡವರಿದ್ದಾರೆ. ಈರ್ವರು ರಾಜದಂಡ ಕೈಯಲ್ಲಿ ಹಿಡಿದು. ಪದ್ಮಾವತಮ್ಮನವರ, ಶ್ರೀ ಗುರುಗಳ ಹಿರಿಮೆ ಹಾಡುತ್ತ ಭೋಪರಾಕು ಹಾಕುತ್ತಿದ್ದಾರೆ.

ಅವರ ಮುಂದೆ ವಿವಿಧ ಆಕಾರದ ಪತಾಕೆಗಳನ್ನು ಹಿಡಿದವರು, ಸಿಂಹ, ಮತ್ಸ್ಯ, ಶಂಖಗಳ ಲಾಂಛನ ಹೊತ್ತವರು ಸಾಲಾಗಿ ಹೊರಟಿದ್ದಾರೆ. ಸನಿಹದಲ್ಲಿ ಜಟಾಧಾರಿ ಸಾಧು ಓರ್ವನು ಕೈಯಲ್ಲಿ ಟಪರು ಬಾರಿಸಿ ಮನಸ್ವಿ ನರ್ತಿಸುವುದರಲ್ಲಿ ಮಗ್ನನಾಗಿದ್ದಾನೆ. ಕೆಳಹಂತದಲ್ಲಿ ಪಟ್ಟಿಕೆಯಲ್ಲಿ ನರ್ತಕಿಯೋರ್ವಳು ನರ್ತಿಸುವಾಗಿ ಹಿನ್ನೆಲೆಯಾಗಿ ಹಾಡುಗಾತಿ, ಮೃದಂಗ ನುಡಿಸುವವ, ತಾಳ ಹಿಡಿದವ, ತಂಬೂರಿ ಮೀಟುವವ ಇದ್ದಾರೆ. ಸನಿಹದಲ್ಲಿ ದೀವಟಿಗೆ ಹಿಡಿದ ಓರ್ವನಿದ್ದಾನೆ. ಎಲ್ಲಕ್ಕೂ ಮುಂದೆ ಬಜಂತ್ರಿ ಮೇಳ ಹೊರಟಿದೆ. ಕಿರುಬಟ್ಟೆ ಧರಿಸಿದ ಇಬ್ಬರು ತಮ್ಮಟೆ ಬಾರಿಸಿದರೆ, ಹಬ್ಬದ ಉಡುಪು ಧರಿಸಿದ ಮೂವರು ನಾಗಸ್ವರ ಊದುತ್ತಿದ್ದಾರೆ. ಜೊತೆಗಿದ್ದವನು ಡೋಲು ನುಡಿಸುತ್ತಿದ್ದಾನೆ. ಇದರ ಕೆಳ ಹಂದರದಲ್ಲಿ ಭಕ್ತಾದಿಗಳು ಎರಡು ಹಗ್ಗಗಳನ್ನು ಹಿಡಿದು ತೇರನ್ನು ಎಳೆಯಲು ಸಿದ್ಧರಾಗಿ ನಿಂತಿದ್ದಾರೆ. ಜನಜಂಗುಳಿಯನ್ನು ನಿಯಂತ್ರಿಸುವುದಕ್ಕಾಗಿ ಅಲ್ಲಲ್ಲಿ ಬೆತ್ತ ಹಿಡಿದ ಜನರಿದ್ದಾರೆ. ಅವರು ಚಿತ್ತಾರದ ಬಟ್ಟೆಯ ನಿಲುವಂಗಿ, ಪಾಯಜಮಾ ತೊಟ್ಟು ನಡುವಿಗೆ ಸೆಲ್ಲೆ ಬಿಗಿದುಕೊಂಡು, ತಲೆಗೆ ರುಮಾಲು ಸುತ್ತಿಕೊಂಡಿದ್ದಾರೆ. ಸಕಲರೂ ಬರಿಗಾಲಿನಲ್ಲಿ ಇರುವುದು ಗಮನಾರ್ಹ. ತೇರಿನ ಆಗಮನವನ್ನು ಕೇರಿಗೆಲ್ಲ ಸಾರಲು ಕಹಳೆ, ತುತೂರಿ, ನಗಾರಿಗಳು ಏಕಪ್ರಕಾರವಾಗಿ ಮೊಳಗುತ್ತವೆ.

ರಥೋತ್ಸವದ ವಿವರಗಳನ್ನು ಸೊಗಸಾಗಿ ಚಿತ್ರಪಟ್ಟಿಕೆಯಲ್ಲಿ ಒಡಮೂಡಿಸಲಾಗಿದೆ. ಹಳಬರು, ಹೆಂಗಳೆಯರು, ತಮ್ಮ ಮಕ್ಕಳ ಜೊತೆಗೆ ಆಗಮಿಸುತ್ತಿದ್ದಾರೆ. ಗೃಹಸ್ಥನೋರ್ವನು ಇಬ್ಬರು ಮಕ್ಕಳೊಂದಿಗೆ ಬಂದು ಜಾತ್ರೆಯಲ್ಲಿ ಏನೇನು ಖರೀದಿಸಬೇಕೆಂದು ಗೃಹಿಣಿಯನ್ನು ವಿಚಾರಿಸುತ್ತಿದ್ದಾನೆ. ಹೆಂಗಳೆಯರಿಬ್ಬರೇ ಕರೆತಂದ ಒಂದು ಮಗು, ಕಂಡದ್ದೆಲ್ಲ ಬೇಕೆಂದು ಚಂಡಿಹಿಡಿದದ್ದರಿಂದ ಏನು ಮಾಡಬೇಕು? ಎಂದು ಅರಿಯದೇ ಕಂಗಾಲಾಗಿದ್ದಾರೆ. ಇವರು ತೊಟ್ಟ ಬಟ್ಟೆ-ಬರೆ ಧರಿಸಿದ ಆಭರಣಗಳು ಅಂದಿನ ವೇಷ-ಭೂಷಣಗಳನ್ನು ಪ್ರತಿನಿಧಿಸುತ್ತವೆ. ರಥೋತ್ಸವಕ್ಕೆಂದು ತಾತ್ಪೂರ್ತಿತ ಅಂಗಡಿಗಳನ್ನು ತೆರೆದ ಶೆಟ್ಟರು ಧನಸಂಪಾದನೆಯಲ್ಲಿ ಮೈಮರೆದಿದ್ದಾರೆ. ಮಿಠಾಯಿಯನ್ನು ಕೊಳ್ಳುತ್ತಿರುವ ಗಿರಾಕಿ, ತೂಕದಲ್ಲಿ ಮೋಸ ಮಾಡದಿರಲು ಅಂಗಡಿಕಾರನಿಗೆ ಅರಿಕೆಮಾಡಿ ಕೊಳ್ಳುತ್ತಿದ್ದಾನೆ.ಕಸ್ತೂರಿ ಮಾರುವ ಶೆಟ್ಟಿ ಕಾಲಿನಿಂದ ತಕ್ಕಡಿಯ ಚಲನೆಗೆ ಆತಂಕವೊಡ್ಡಿ ಮೋಸ ಮಾಡಲು ಯತ್ನಿಸಿದಾಗ ಗಿರಾಕಿಯು ಪ್ರತಿಭಟಿಸುತ್ತಿದ್ದಾನೆ. ಬಟ್ಟೆ ಅಂಗಡಿಯವನು ಮೊಳ ಕುಗ್ಗಿಸಿ, ಬಟ್ಟೆಯ ಉದ್ದವನ್ನು ಹಿಗ್ಗಿಸುವಾಗ, ಗಿರಾಕಿಯ ಪತ್ನಿ ಆಕ್ಷೇಪವೆತ್ತುತ್ತಿದ್ದಾಳೆ. ಹೆಂಗಳೆಯೋರ್ವಳು ಶೆಟ್ಟಿಕೊಟ್ಟ ತೆಂಗಿನಕಾಯಿ ಚೆನ್ನಾಗಿಲ್ಲವೆಂದು ಹಿಂದಿರುಗಿಸುತ್ತಿದ್ದಾಳೆ. ಹೆಂಗಳೆಯರೂ ವ್ಯಾಪಾರದಲ್ಲಿ ಹಿಂದೆ ಬಿದ್ದಿಲ್ಲ. ಒಬ್ಬಳು ಬಳೆತೊಡಿಸಿದರೆ, ಇನ್ನೊಬ್ಬಳು ಕಾಲುಂಗುರ ತೊಡಿಸುತ್ತಿದ್ದಾಳೆ. ಮಂಡಕ್ಕಿಯವಳು ಕಡ್ಲೆಪುರಿತುಂಬಿದ ನಾಡಶೇರನ್ನು ಗಿರಾಕಿಯು ಒಡ್ಡಿದ ಬಟ್ಟೆಯಲ್ಲಿ ಸುರಿಯುತ್ತಿದ್ದಾಳೆ. ಜಾತ್ರೆಯಲ್ಲಿ ರಸಿಕಶಿಖಾಮಣಿಗಳಿಗೂ ಕೊರತೆಯಿರುತ್ತಿರಲಿಲ್ಲವೆನಿಸುತ್ತದೆ. ಲಕ್ಷಣವಾಗಿ ಅಲಂಕರಿಸಿಕೊಂಡ ಯುವಕನೋರ್ವನು ಹೆಣ್ಣೊಡನೆ ಸರಸ

ಸಂಭಾಷಣೆಯಲ್ಲಿ ಮೈಮರೆತದ್ದನ್ನು ಚಿತ್ರಿಸಲಾಗಿದೆ. ಈ ಎಲ್ಲ ನೂಕು-ನುಗ್ಗಲಿನಲ್ಲಿ ಕಳ್ಳ- ಕಾಕರು ತಮ್ಮ ಕೈಚಳಕ ತೋರಿಸದೇ ಇರುವರೇ? ಅಂತೆಯೇ ಗುಪ್ತಚರ ಸಿಪಾಯಿಯೊಬ್ಬ ಕಳ್ಳನನ್ನು ಕದ್ದಸಾಮಾನಿನೊಂದಿಗೆ ಬಂಧಿಸಿ ಥಳಿಸುತ್ತಿದ್ದಾನೆ.

ಇಂಥ ತೇರು ಮತ್ತು ರಥೋತ್ಸವದ ಚಿತ್ರಗಳು ಅನೇಕ ದೇವಾಲಯಗಳಲ್ಲಿ ಚಿತ್ರಿತವಾಗಿರಲು ಸಾಕು. ಅವುಗಳನ್ನೆಲ್ಲ ಆಳವಾಗಿ ಅಭ್ಯಸಿಸಿದರೆ ರಥಶಿಲ್ಪದ ಪ್ರಕಾರಗಳು, ಅವುಗಳ ಪಟ್ಟಿಕೆಗಳಲ್ಲಿ ಮೂಡಿಬಂದ ಪೌರಾಣಿಕ ಮತ್ತು ಸಾಮಾಜಿಕ ಜೀವನಗಳು ಮಹಾ ಪ್ರಬಂಧಕ್ಕೆ ಒಳ್ಳೆ ಸಾಮಗ್ರಿ ಒದಗಿಸುತ್ತವೆ.



ಕೇತಪ್ಪಯ್ಯ ದೇವಾಲಯ, ಭಟಕಳ. **1.** ತೇರನೆಳೆವ ಉಬ್ಬು ಶಿಲ್ಪ, ವೆಂಕಟರಮಣ ದೇವಾಲಯ, ವಂಕಟಾಪುರ **2.** ಸಾಲಂಕೃತ ತೇರಿನ ಉಬ್ಬು ಶಿಲ್ಪ, ಜೈನ ಮಠ, ಶ್ರವಣಬೆಳಗೊಳ **3.** ಭಿತ್ತಿಚಿತ್ರದಲ್ಲಿ ತೇರು, **4.** ತೇರಿಗೆ ಹೊರಟವರು **5.** ಪ್ರೇಮಿಗಳು **6.** ಸಿಕ್ಕಿಬಿದ್ದ ಕಳ್ಳ **7.** ವಾದ್ಯಗಾರರು